# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಮೊದಲನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 12ನೇ ಜೂನ್, 2013
(ಸಮಯ: ಬೆಳಗ್ಗೆ 11.00 ಗಂಟೆಗೆ)

-----

### 1. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

**ಕಾರ್ಯದರ್ಶಿಯವರು:-**

ಅ) 13ನೇ ವಿಧಾನಸಭೆಯ ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿಯ ಎರಡನೇ ವರದಿಯನ್ನು ಸಭೆಯ ಮುಂದಿಡುವುದು.

ಆ) (ಸದಸ್ಯರಿಗೆ ಈಗಾಗಲೇ ಪ್ರತ್ಯೇಕವಾಗಿ ಕಳುಹಿಸಲಾಗಿರುವ ಮೂರನೇ ಹಾಗೂ ನಾಲ್ಕನೇ ಪಟ್ಟಿಯ ರೀತ್ಯಾ).

### 2. ಶಾಸನ ರಚನೆ

**ವಿಧೇಯಕವನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು**

**ಕರ್ನಾಟಕ ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕ, 2013**
**ಶ್ರೀ ಎಚ್. ಕೆ. ಪಾಟೀಲ್ ( ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು) ಅವರು:-**

ಅ) 2013ನೇ ಸಾಲಿನ ಕರ್ನಾಟಕ ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

ಮು.ತಿ.ನೋ.,

## ೩. ಘನತೆವೆತ್ತ ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ

ಶ್ರೀ ಬಸವರಾಜ ರಾಯರೆಡ್ಡಿ, ಅವರು ದಿನಾಂಕ: ೦4ನೇ ಜೂನ್, 2013ರಂದು ಸೂಚಿಸಿದ ಕೆಳಕಂಡ ಪ್ರಸ್ತಾವದ ಮೇಲೆ ನಡೆದ ಚರ್ಚೆಗೆ ಸರ್ಕಾರದಿಂದ ಉತ್ತರ.

"2013ರ ಜೂನ್, 3ರಂದು ವಿಧಾನಮಂಡಲದ ಉಭಯ ಸದನಗಳ ಸದಸ್ಯರನ್ನುದ್ದೇಶಿಸಿ ದಯಪಾಲಿಸಿದ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ಘನತೆವೆತ್ತ ರಾಜ್ಯಪಾಲರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ"

## 4. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಕೆ.ಆರ್. ರಮೇಶ್‌ಕುಮಾರ್, ಎನ್.ಹೆಚ್. ಶಿವಶಂಕರರೆಡ್ಡಿ, ಎಂ. ರಾಜಣ್ಣ, ಜಿ.ಕೆ. ಕೃಷ್ಣಾರೆಡ್ಡಿ, ಕೆ.ಎಸ್. ಮಂಜುನಾಥಗೌಡ, ಜಿ. ಮಂಜುನಾಥ ಹಾಗೂ ಇತರರು ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಮತ್ತು ಕುಸಿಯುತ್ತಿರುವ ಅಂತರ್ಜಲ ಹಾಗೂ ಇದರ ನಿವಾರಣೆಗಾಗಿ ಹಮ್ಮಿಕೊಳ್ಳಬೇಕಾದ "ಶಾಶ್ವತ ನೀರಾವರಿ" ಯೋಜನೆ ವಿಚಾರದಲ್ಲಿ ನಡೆದ ಚರ್ಚೆಗೆ ಸರ್ಕಾರದ ಉತ್ತರ.

2. ಶ್ರೀಯುತರುಗಳಾದ ಕೆ.ಶಿವಮೂರ್ತಿ, ಕ್ಯಾತಸಂದ್ರ ಎನ್. ರಾಜಣ್ಣ ಮತ್ತು ಜಿ. ರಾಮಕೃಷ್ಣ, ಅವರುಗಳು ರಾಜ್ಯದಲ್ಲಿರುವ ಕಂದಾಯ ರಹಿತ ಗ್ರಾಮಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತನೆ ಮಾಡುವುದು ಹಾಗೂ ಯೋಜನಾ ಆಯೋಗದಿಂದ ನೇರವಾಗಿ ಹಣ ತೊಡಗಿಸುವ ಕಂದಾಯ ರಹಿತ ಗ್ರಾಮಗಳಿಗೆ ಗ್ರಾಮ ಸಭೆ ನಡೆಸಲು ಮೂಲಭೂತ ಸೌಲಭ್ಯ ದೊರಕಿಸುವ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

3. ಶ್ರೀಯುತರುಗಳಾದ ಕೆ.ಜಿ. ಬೋಪಯ್ಯ, ಎಂ.ಸಿ. ಅಪ್ಪಚ್ಚು ರಂಜನ್, ಯು.ಬಿ. ಬಣಕಾರ್, ಗೋವಿಂದ ಎಂ. ಕಾರಜೋಳ ಅವರುಗಳು ರಾಜ್ಯ ಸರ್ಕಾರದಿಂದ ಮಂಜೂರಾಗಿದ್ದ ಮೊರಾರ್ಜಿ, ಕಿತ್ತೂರುರಾಣಿ ಚೆನ್ನಮ್ಮ ಮತ್ತು ವಾಜಪೇಯಿ ವಸತಿ ನಿಲಯ ಶಾಲೆಗಳನ್ನು ಮುಚ್ಚಲು ಆದೇಶವಾಗಿರುವುದರಿಂದ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗದವರಿಗೆ ತೊಂದರೆಯುಂಟಾಗಿರುವ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

4. ಶ್ರೀಯುತರುಗಳಾದ ಕೆ.ಎಸ್. ಪುಟ್ಟಣ್ಣಯ್ಯ, ಬಿ. ಶ್ರೀರಾಮುಲು ಮತ್ತು ಯು.ಬಿ ಬಣಕಾರ್ ಅವರುಗಳು ಯಶಸ್ವಿನಿ ಯೋಜನೆಯನ್ನು ವಾಜಪೇಯಿ ಆರೋಗ್ಯ ಶ್ರೀ ಯೋಜನೆಯೊಂದಿಗೆ ಸಂಯೋಜನೆ ಮಾಡಿರುವುದರಿಂದ ಸಾಮಾನ್ಯ ವರ್ಗದವರಿಗೆ ಮತ್ತು ರೈತರಿಗೆ ಉಂಟಾಗಿರುವ ಅನಾನುಕೂಲತೆ ಕುರಿತು ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

ಪು.ತಿ.ನೋ.,

5. ಶ್ರೀಯುತರುಗಳಾದ ಎಂ.ಟಿ. ಕೃಷ್ಣಪ್ಪ, ಹೆಚ್. ಎಸ್. ಶಿವಶಂಕರ್, ಬಿ.ಬಿ.ನಿಂಗಯ್ಯ, ಮಾನಪ್ಪ ವಜ್ಜಲ, ಹೆಚ್.ಸಿ. ಬಾಲಕೃಷ್ಣ ಹಾಗೂ ಇತರರು ರಾಜ್ಯದಲ್ಲಿ ಅಕ್ರಮ ಮರಳು ಗಣಿಗಾರಿಕೆ ನಡೆಯುತ್ತಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗುತ್ತಿರುವ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

6. ಶ್ರೀಯುತರುಗಳಾದ ಹೆಚ್.ಡಿ. ಕುಮಾರಸ್ವಾಮಿ, ಸಿ.ಬಿ. ಸುರೇಶ್ ಬಾಬು, ಕೆ.ಎಂ. ಶಿವಲಿಂಗೇಗೌಡ, ಮತ್ತು ಎಸ್. ಭೀಮಾನಾಯಕ ಅವರುಗಳು ರಾಜ್ಯದ ಚಿಕ್ಕನಾಯಕನಹಳ್ಳಿ-ತಿಪಟೂರ-ಗಂಡಸಿ-ದುದ್ದ ರಸ್ತೆ ನಿರ್ಮಾಣ ಕಾರ್ಯ ಸ್ಥಗಿತಗೊಂಡಿರುವುದರಿಂದ ಉಂಟಾಗಿರುವ ತೊಂದರೆಯ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

7. ಶ್ರೀಯುತರುಗಳಾದ ಹೆಚ್.ಡಿ. ಕುಮಾರಸ್ವಾಮಿ, ಸಿ.ಬಿ.ಸುರೇಶ್‌ಬಾಬು, ಹೆಚ್.ಸಿ. ಬಾಲಕೃಷ್ಣ, ಡಿ.ಸಿ. ತಮ್ಮಣ್ಣ ಹಾಗೂ ಇತರರು ಕುಣಿಗಲ್ ತಾಲ್ಲೂಕಿನ ಲೋಕೋಪಯೋಗಿ ಇಲಾಖೆಯ ಉಪ ವಿಭಾಗದಿಂದ ಮರಳು ವಿಲೇವಾರಿಯಲ್ಲಿ ಅಕ್ರಮ ನಡೆದಿರುವ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

8. ಶ್ರೀಯುತರುಗಳಾದ ಹೆಚ್.ಡಿ. ಕುಮಾರಸ್ವಾಮಿ, ಹೆಚ್.ಡಿ. ರೇವಣ್ಣ, ಎನ್. ಚಲುವರಾಯಸ್ವಾಮಿ, ಡಿ. ನಾಗರಾಜಯ್ಯ, ಎಸ್. ಭೀಮನಾಯಕ, ವೈ.ಎಸ್.ವಿ. ದತ್ತ ಹಾಗೂ ಇತರರು ಹಾಸನ ಜಿಲ್ಲೆಯ ಎ.ಪಿ.ಎಂ.ಸಿ ಮಾರುಕಟ್ಟೆಯಲ್ಲಿ ಕಳಪೆ ಮಟ್ಟದ ಆಲೂಗಡ್ಡೆ ಬೀಜವನ್ನು ರೈತರಿಗೆ ವಿತರಿಸಿರುವುದರ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

*Raj N*

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
(www.kar.nic.in/kla)